

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 733 (662)
ಸದಸ್ಯರ ಹೆಸರು : ಶ್ರೀ ಎನ್. ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸಬೇಕಾದ ದಿನಾಂಕ : 25.09.2020
ಉತ್ತರಿಸುವ ಸಚಿವರು : ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 5 ವರ್ಷಗಳ ಬಿದಾಯಿ ಯೋಜನೆಯ ಅನ್ವಯ ಎಷ್ಟು ಕುಟುಂಬಗಳಿಗೆ ಅನುದಾನ ನೀಡಲಾಗಿದೆ; (ಜಿಲ್ಲಾವಾರು ಮಾಹಿತಿ ನೀಡುವುದು) | ಕಳೆದ 5 ವರ್ಷಗಳಲ್ಲಿ ಬಿದಾಯಿ ಯೋಜನೆಯಡಿ ಬಿಡುಗಡೆಯಾದ ಅನುದಾನದ ಜಿಲ್ಲಾವಾರು ಕುಟುಂಬಗಳ ಮಾಹಿತಿಯನ್ನು ಅನುಭಂಧ-1 ರಲ್ಲಿ ನೀಡಲಾಗಿದೆ. |
| ಆ) | ಬಿದಾಯಿ ಯೋಜನೆಯ ಫಲಾನುಭವಿಯಾಗಲು ಇರುವ ನಿಬಂಧನೆಗಳೇನು? | ಬಿದಾಯಿ ಯೋಜನೆಯ ಫಲಾನುಭವಿಯಾಗಲು ಇರುವ ನಿಬಂಧನೆಗಳ ವಿವರಗಳನ್ನು ಅನುಭಂಧ-2 ರಲ್ಲಿ ನೀಡಲಾಗಿದೆ. |
| ಇ) | ಬಿದಾಯಿ ಯೋಜನೆಯಲ್ಲಿ ಅನರ್ಹ ಫಲಾನುಭವಿಗಳಿಗೆ ಅನುದಾನ ನೀಡಿರುವ ಕಾರಣ ರೂ.330.00 ಕೋಟಿಗೂ ಹೆಚ್ಚು ಮೊತ್ತದ ಅವ್ಯವಹಾರವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? ಈ ಅವ್ಯವಹಾರದಲ್ಲಿ ಭಾಗಿಯಾಗಿರುವ ಅಧಿಕಾರಿಗಳ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ. | ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಈ) | ಬಿದಾಯಿ ಯೋಜನೆಯ ಫಲಾನುಭವಿಯಾಗಲು ಹೊಂದಿರಬೇಕಾದ ಕನಿಷ್ಟ ವಯೋಮಿತಿ ಎಷ್ಟು? ಕನಿಷ್ಟ ವಯಸ್ಸಿಗಿಂತ ಕಡಿಮೆ ವಯಸ್ಸಿನ ವಧುಗಳಿಗೆ ಬಿದಾಯಿ ಯೋಜನೆಯಲ್ಲಿ ಅನುದಾನ ಬಿಡುಗಡೆ ಮಾಡಿದ ಅಧಿಕಾರಿಯ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ; ನಿಯಮಗಳಿಗೆ ವಿರುದ್ಧವಾಗಿ ನೀಡಿರುವ ಅನುದಾನವನ್ನು ಹಿಂಪಡೆಯಲು ಸರ್ಕಾರ ಯಾವ ಕ್ರಮ ಕೈಗೊಳ್ಳಲಾಗಿದೆ. | ಬಿದಾಯಿ ಯೋಜನೆಯ ಫಲಾನುಭವಿಯಾಗಲು ವಧುವಿಗೆ ಮದುವೆಯ ದಿನಾಂಕಕ್ಕೆ 18 ವರ್ಷ ವಯಸ್ಸು ಹಾಗೂ ವರನಿಗೆ 21 ವರ್ಷ ವಯಸ್ಸು ಆಗಿರತಕ್ಕದ್ದು. ಕನಿಷ್ಟ ವಯಸ್ಸಿಗಿಂತ ಕಡಿಮೆ ವಯಸ್ಸಿನ ವಧುಗಳಿಗೆ ಬಿದಾಯಿ ಯೋಜನೆಯಲ್ಲಿ ಅನುದಾನ ಬಿಡುಗಡೆ ಮಾಡಿದ ಬಗ್ಗೆ ಯಾವುದೇ ದೂರುಗಳನ್ನು ಸ್ವೀಕರಿಸಿರುವುದಿಲ್ಲ. |

ಸಂಖ್ಯೆ: ಎಂಡಬ್ಲೂಡಿ 113 ಎಲ್.ಎಂ.ಕ್ಯೂ 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

*ಅಲ್ಪಸಂಖ್ಯಾತರ ನಿರ್ದೇಶನಾಲಯ*

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಎನ್. ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು) ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 733 (662) ಕ್ಕೆ ಅನುಭಂದ-1

ಕಳೆದ 5 ವರ್ಷಗಳ ಬಿದಾಯಿ ಯೋಜನೆಯಡಿ ಅನುದಾನ ನೀಡಲಾದ ಕುಟುಂಬಗಳ ವಿವರ

| ಕ್ರ. ಸಂ | ಜಿಲ್ಲೆ | ಭೌತಿಕ |
|---|---|---|
| 1 | ಬೆಂಗಳೂರು(ನ) | 6793 |
| 2 | ಬೆಂಗಳೂರು(ಗ್ರಾ) | 1189 |
| 3 | ಬಾಗಲಕೋಟೆ | 2991 |
| 4 | ಬೆಳಗಾವಿ | 6422 |
| 5 | ಬಳ್ಳಾರಿ | 4424 |
| 6 | ಬೀದರ್ | 7459 |
| 7 | ಬಿಜಾಪುರ | 4588 |
| 8 | ಚಾಮರಾಜನಗರ | 1854 |
| 9 | ಚಿಕ್ಕಮಗಳೂರು | 1632 |
| 10 | ಚಿತ್ರದುರ್ಗಾ | 2124 |
| 11 | ಚಿಕ್ಕಬಳ್ಳಾಪುರ | 1715 |
| 12 | ದಕ್ಷಿಣ ಕನ್ನಡ | 6409 |
| 13 | ದಾವಣಗೆರೆ | 4036 |
| 14 | ಧಾರವಾಡ | 7743 |
| 15 | ಗದಗ | 2694 |
| 16 | ಗುಲ್ಬರ್ಗಾ | 7080 |
| 17 | ಹಾಸನ | 1958 |
| 18 | ಹಾವೇರಿ | 7601 |
| 19 | ಕೊಡಗು | 1713 |
| 20 | ಕೋಲಾರ | 1936 |
| 21 | ಕೊಪ್ಪಳ | 3664 |
| 22 | ಮಂಡ್ಯ | 1265 |
| 23 | ಮೈಸೂರು | 3715 |
| 24 | ರಾಯಚೂರು | 3361 |
| 25 | ರಾಮನಗರ | 1838 |
| 26 | ಶಿವಮೊಗ್ಗ | 3499 |
| 27 | ತುಮಕೂರು | 3833 |
| 28 | ಉಡುಪಿ | 2588 |
| 29 | ಉತ್ತರ ಕನ್ನಡ | 2858 |

**ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಎನ್. ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು) ರವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 733 (662) ಕ್ಕೆ ಅನುಭಂದ-2**

**ಬಿದಾಯಿ ಯೋಜನೆಯ ಫಲಾನುಭವಿಯಾಗಲು ಇರುವ ನಿಬಂಧನೆಗಳು**

ಆರ್ಥಿಕವಾಗಿ ಹಿಂದುಳಿದಿರುವ ಅಲ್ಪಸಂಖ್ಯಾತರ ಕುಟುಂಬದ ಹೆಣ್ಣು ಮಕ್ಕಳಿಗೆ, ವಿಚ್ಛೇದಿತ ಮಹಿಳೆಯರಿಗೆ ಹಾಗೂ ವಿಧವೆಯರಿಗೆ ಮದುವೆಯ ನಿಮಿತ್ತ ವಿವಾಹದ ಖರ್ಚು ವೆಚ್ಚಗಳು, ಜೀವನಾವಶ್ಯಕ ಸಾಮಗ್ರಿಗಳು ಅಥವಾ ನಗದು ಮತ್ತು ಸಾಮಗ್ರಿಗಳನ್ನು ನೀಡಲು ರೂ. 50,000/-ಗಳ ಸಹಾಯಧನ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಮಂಜೂರು ಮಾಡಲು ಆದೇಶಿಸಿದೆ.

(1) ಈ ಯೋಜನೆಯಡಿಯಲ್ಲಿ ಧನಸಹಾಯ ಪಡೆಯುವ ಫಲಾನೂಭವಿಯ ಕುಟುಂಬವು ಬಿ.ಪಿ.ಎಲ್/ಅಂತ್ಯೋದಯ ಕಾರ್ಡ್ ಹೊಂದಿದವರಾಗಿರಬೇಕು.

(2) ಈ ಸೌಲಭ್ಯ ಜೀವನದಲ್ಲಿ ಒಮ್ಮೆ ಮಾತ್ರ ಪಡೆಯಬಹುದಾಗಿದೆ.

(3) ಈ ಸೌಲಭ್ಯ ಪಡೆಯುವ ವಧುವಿಗೆ ಮದುವೆಯ ದಿನಾಂಕಕ್ಕೆ 18 ವರ್ಷ ವಯಸ್ಸು ಹಾಗೂ ವರನಿಗೆ 21 ವರ್ಷ ವಯಸ್ಸು ಆಗಿರತಕ್ಕದ್ದು.

(4) ರಾಜ್ಯದಲ್ಲಿ ಕನಿಷ್ಟ 3 ವರ್ಷದವರೆಗೆ ವಧು ವಾಸವಾಗಿರುವ ಬಗ್ಗೆ ಧೃಢೀಕೃತ ದಾಖಲಾತಿ ಪಡೆಯುವುದು.

(5) ಮದುವೆ ನಿಶ್ಚಯವಾಗಿರುವ ಬಗ್ಗೆ, ಲಗ್ನ ಪತ್ರಿಕೆ (ಮಾಡಿಸಿದ್ದಲ್ಲಿ) ಮತ್ತು ಇತರೆ ದಾಖಲಾತಿಗಳೊಂದಿಗೆ ಪ್ರಸ್ತಾವನೆ ಪಡೆದು ಫಲಾನುಭವಿಯ ಕೋರಿಕೆಯ ಮೇರೆಗೆ ಮದುವೆಯ ದಿನಾಂಕದಂದು ರೂ. 50,000/-ದ ವಧುವಿನ ಹೆಸರಿಗಿರುವ ಚೆಕ್ಕು ಆನ್‌ಲೈನ್ ಮೂಲಕ ರೂ. 50,000/-ನೀಡಲಾಗುವುದು

(6) ಮದುವೆಯಾದ ನಂತರ ವಧು-ವರನ ಭಾವಚಿತ್ರ, ಧಾರ್ಮಿಕ ಸಂಸ್ಥೆ ನೀಡಿರುವ ಮದುವೆ ಪ್ರಮಾಣ ಪತ್ರ ಅಥವಾ ಉಪ ನೋಂದಣಾಧಿಕಾರಿಗಳು ನೀಡಿರುವ ಮದುವೆ ನೋಂದಣಿ ಪತ್ರ ಪಡೆಯುವುದು.

(7) ಮೇಲಿನ ಷರತ್ತಿನಲ್ಲಿರುವ ದಾಖಲಾತಿಗಳನ್ನು ಮದುವೆಯ ತರುವಾಯ ನೀಡಲಾಗುವುದೆಂದು ಪೂರ್ವಭಾವಿಯಾಗಿ ಘೋಷಣಾ ಪತ್ರವನ್ನು ಪಡೆಯತಕ್ಕದ್ದು.

(8) ಈ ಯೋಜನೆಯ ಲಾಭ ವ್ಯೆಯಕ್ತಿಕ ಹಾಗೂ ಸಾಮೂಹಿಕವಾಗಿ ನೆರವೇರಿಸಲಾಗುವ ವಿವಾಹಗಳಿಗೂ ಅನ್ವಯಿಸುವುದು.

(9) ನಿರ್ದೇಶಕರು, ಅಲ್ಪಸಂಖ್ಯಾತರ ನಿರ್ದೇಶನಾಲಯ ಇವರು ಪ್ರತಿ ಜಿಲ್ಲೆಯಲ್ಲಿರುವ ಅಲ್ಪಸಂಖ್ಯಾತರ ಜನಸಂಖ್ಯೆಯ ಆಧಾರದ ಮೇಲೆ ಗುರಿ ನಿಗಧಿಪಡಿಸಿ ಪ್ರತಿ ಜಿಲ್ಲೆಗೆ ಅನುದಾನ ಬಿಡುಗಡೆ ಮಾಡತಕ್ಕದ್ದು.

<u>ಸಲ್ಲಿಸಬೇಕಾದ ದಾಖಲಾತಿಗಳು:-</u>

1. ಈ ಯೋಜನೆಯಡಿಯಲ್ಲಿ ಧನಸಹಾಯ ಪಡೆಯುವ ಫಲಾನೂಭವಿಯ ಕುಟುಂಬವು ಬಿ.ಪಿ.ಎಲ್/ಅಂತ್ಯೋದಯ ಕಾರ್ಡ್ ಹೊಂದಿದವರಾಗಿರಬೇಕು.
2. ಈ ಸೌಲಭ್ಯ ಜೀವನದಲ್ಲಿ ಒಮ್ಮೆ ಮಾತ್ರ ಪಡೆಯಬಹುದಾಗಿದೆ.
3. ಈ ಸೌಲಭ್ಯ ಪಡೆಯುವ ವಧುವಿಗೆ ಮದುವೆಯ ದಿನಾಂಕಕ್ಕೆ ಕನಿಷ್ಟ 18 ವರ್ಷ ವಯಸ್ಸು ಹಾಗೂ ವರನಿಗೆ 21 ವರ್ಷ ವಯಸ್ಸು ಆಗಿರತಕ್ಕದ್ದು.
4. ಈ ಯೋಜನೆಯ ಸೌಲಭ್ಯವು ರಾಜ್ಯದ ನಿವಾಸಿಗಳಿಗೆ ಮಾತ್ರ ಅನ್ವಯಿಸುತ್ತದೆ.
5. ವರನಿಗೆ ಜೀವಂತ ಹೆಂಡತಿ ಇದ್ದಲ್ಲಿ, ಈ ಯೋಜನೆಯ ಸೌಲಭ್ಯ ಅನ್ವಯಿಸುವುದಿಲ್ಲ.
6. ಒಂದು ಕುಟುಂಬದಲ್ಲಿ ಒಬ್ಬರಿಗೆ ಮಾತ್ರ ಈ ಯೋಜನೆಯಡಿ ಸೌಲಭ್ಯ ನೀಡತಕ್ಕದ್ದು.
7. ಮದುವೆಯಾದ ನಂತರ ವಧು-ವರನ ಭಾವಚಿತ್ರ, ಧಾರ್ಮಿಕ ಸಂಸ್ಥೆ ನೀಡಿರುವ ಮದುವೆ ಪ್ರಮಾಣ ಪತ್ರ ಅಥವಾ ಉಪ ನೋಂದಣಾಧಿಕಾರಿಗಳು ನೀಡಿರುವ ಮದುವೆ ನೋಂದಾಣಿ ಪತ್ರ ಪಡೆದ ನಂತರ ರೂ. 50,000/-ಗಳ ನಗದು ಸಹಾಯಧನವನ್ನು ವಧುವಿನ ತಾಯಿ/ತಂದೆಯ ಬ್ಯಾಂಕ್ ಖಾತೆಗೆ ಆನ್‌ಲೈನ್ ಮೂಲಕ ಜಮಾ ಮಾಡುವುದು. ಒಂದು ವೇಳೆ ಪೋಷಕರು ಜೀವಂತವಾಗಿರಾದೇ ಇದ್ದ ಪಕ್ಷದಲ್ಲಿ ವಧುವಿನ ಬ್ಯಾಂಕ್ ಖಾತೆಗೆ ಆನ್‌ಲೈನ್ ಮೂಲಕ ಜಮಾ ಮಾಡುವುದು.

8. ಮೇಲಿನ ಷರತ್ತಿನಲ್ಲಿರುವ ದಾಖಲಾತಿಗಳನ್ನು ಮದುವೆಯ ತರವಾಯ ನೀಡುಲಾಗುವುದೆಂದು ಪೂರ್ವಭಾವಿಯಾಗಿ ಘೋಷಣಾ ಪತ್ರವನ್ನು ಪಡೆಯತಕ್ಕದ್ದು.
9. ಈ ಯೋಜನೆಯ ಲಾಭ ವೈಯಕ್ತಿಕ ಅಥವಾ ಸಾಮೂಹಿಕವಾಗಿ ನೆರವೇರಿಸಲಾಗುವ ವಿವಾಹಗಳಿಗೂ ಅನ್ವಯಿಸುವುದು.
10. ಸ್ಥಳೀಯ ಸರ್ಕಾರೇತರ ಸಂಸ್ಥೆಗಳು ಈ ಯೋಜನೆಯಡಿ ನಿಗದಿಪಡಿಸಲಾಗಿರುವ ದಾಖಲಾತಿಗಳನ್ನು ನೀಡಿ ಅರ್ಹ ಫಲಾನುಭವಿಗಳಿಗೆ ನೀಡಲಾಗುವ ಸಹಾಯಧನದೊಂದಿಗೆ ಇತರೆ ಸೌಲಭ್ಯಗಳನ್ನು ಒದಗಿಸಬಹುದಾಗಿರುತ್ತದೆ.
11. ಅರ್ಜಿದಾರರು ಸಹಾಯಧನ ಮಂಜೂರಾತಿಗೆ ಅಲ್ಪಸಂಖ್ಯಾತರ ಇಲಾಖೆಯ ಜಿಲ್ಲಾ ಮಟ್ಟದ ಅಧಿಕಾರಿಯು ನಿಗದಿತ ಅರ್ಜಿ ನಮೂನೆ ಹಾಗೂ ಅಗತ್ಯ ದಾಖಲಾತಿಗಳು ಮದುವೆ ನಡೆಯುವ ದಿನಾಂಕದಿಂದ ಒಂದು ವಾರ ಮುಂಚೆ ಸಲ್ಲಿಸತಕ್ಕದ್ದು.

**ನಿರ್ದೇಶಕರು,**
**ಅಲ್ಪಸಂಖ್ಯಾತರ ನಿರ್ದೇಶನಾಲಯ,**
**ಬೆಂಗಳೂರು.**